# ಕರ್ನಾಟಕ ವಿಧಾನ ಪರಿಷತ್ತು

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2207

02. ಮಾನ್ಯ ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ. ಸುನೀಲ್ ವಲ್ಯಾಪುರ್

(ವಿಧಾನ ಸಭೆಯಿಂದ ಚುನಾಯಿತರಾದವರು)

03. ಉತ್ತರಿಸುವ ದಿನಾಂಕ : 25/03/2021

04. ಉತ್ತರಿಸುವ ಸಚಿವರು. : ಮಾನ್ಯ ಗೃಹ ಸಚಿವರು

| ಪ್ರಶ್ನೆ | ಉತ್ತರ |
|---|---|
| ಅ) ರಾಜ್ಯದಲ್ಲಿ ಕಳ್ಳತನ ಪ್ರಕರಣಗಳು ಹೆಚ್ಚಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಕಳೆದ ಒಂದು ವರ್ಷದಲ್ಲಿ ದಾಖಲಾದ ಪ್ರಕರಣಗಳ ಸಂಖ್ಯೆ ಎಷ್ಟು ; (ಜಿಲ್ಲಾವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿ ಕಳ್ಳತನ ಪ್ರಕರಣಗಳು ವರದಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆ.<br><br>ಕಳೆದ ಒಂದು ವರ್ಷದಲ್ಲಿ ದಾಖಲಾದ , ಪತ್ತೆ ಹಚ್ಚಲಾದ ಹಾಗೂ ಬಾಕಿ ಇರುವ ಕಳ್ಳತನ ಪ್ರಕರಣಗಳ ಜಿಲ್ಲಾವಾರು ಮಾಹಿತಿಯನ್ನು **ಅನುಬಂಧ-1ರಲ್ಲಿ** ನೀಡಲಾಗಿದೆ.<br><br>ಮುಂದುವರೆದು, ಕಳ್ಳತನ ಪ್ರಕರಣಗಳಲ್ಲಿ ಆರೋಪಿಗಳನ್ನು ಮತ್ತು ಕಳುವಾದ ಮಾಲಿನ ಪತ್ತೆ ಕಾರ್ಯ ಮುಂದುವರೆಯುವುದರಿಂದ ಬಾಕಿ ಇರಲು ಪ್ರಮುಖ ಕಾರಣವಾಗಿರುತ್ತದೆ. |
| ಆ) ಇವುಗಳಲ್ಲಿ ಎಷ್ಟು ಪ್ರಕರಣಗಳನ್ನು ಪತ್ತೆ ಹಚ್ಚಲಾಗಿದೆ ; ಬಾಕಿ ಇರುವ ಪ್ರಕರಣಗಳೆಷ್ಟು ಮತ್ತು ಬಾಕಿ ಇರಲು ಕಾರಣಗಳೇನು ; (ಜಿಲ್ಲಾವಾರು ಮಾಹಿತಿ ನೀಡುವುದು) | |
| ಇ) ಇಂತಹ ಕಳ್ಳತನ ಪ್ರಕರಣಗಳನ್ನು ತಡೆಯಲು ಮತ್ತು ಪತ್ತೆ ಹಚ್ಚಲು ಸರ್ಕಾರ ಕೈಗೊಂಡ ಕ್ರಮಗಳೇನು ? (ವಿವರ ನೀಡುವುದು) | ಕಳ್ಳತನ ಪ್ರಕರಣಗಳನ್ನು ತಡೆಗಟ್ಟಲು ಹಾಗೂ ಪತ್ತೆಹಚ್ಚಲು ಕೈಗೊಂಡ ಕ್ರಮಗಳ ವಿವರಗಳನ್ನು **ಅನುಬಂಧ-2ರಲ್ಲಿ** ನೀಡಲಾಗಿದೆ. |

**ಒಇ14ಪಿಸಿಕ್ಯೂ 2021**

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಸುನೀಲ್ ವಲ್ಯಾಪುರ್( ವಿಧಾನ ಸಭೆಯಿಂದ ಚುನಾಯಿತರಾದವರು)ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ. 2207ರ ಅನುಬಂಧ-1

| ಕ್ರ.ಸಂ | ನಗರ/ಜಿಲ್ಲೆ | 2020 | | | 2021(Up to 15th March) | | |
|---|---|---|---|---|---|---|---|
| | | ದಾಖಲಾದ ಕಳ್ಳತನ ಪ್ರಕರಣಗಳ ಸಂಖ್ಯೆ | ಪತ್ತೆಹಚ್ಚಲಾದ ಕಳ್ಳತನ ಪ್ರಕರಣಗಳ ಸಂಖ್ಯೆ | ಪತ್ತೆ ಹಚ್ಚಲು ಬಾಕಿ ಇರುವ ಕಳ್ಳತನ ಪ್ರಕರಣಗಳ ಸಂಖ್ಯೆ | ದಾಖಲಾದ ಕಳ್ಳತನ ಪ್ರಕರಣಗಳ ಸಂಖ್ಯೆ | ಪತ್ತೆಹಚ್ಚಲಾದ ಕಳ್ಳತನ ಪ್ರಕರಣಗಳ ಸಂಖ್ಯೆ | ಪತ್ತೆ ಹಚ್ಚಲು ಬಾಕಿ ಇರುವ ಕಳ್ಳತನ ಪ್ರಕರಣಗಳ ಸಂಖ್ಯೆ |
| 1 | ಬೆಂಗಳೂರು ನಗರ | 6245 | 2123 | 4122 | 1402 | 235 | 1167 |
| 2 | ಮೈಸೂರು ನಗರ | 405 | 172 | 233 | 122 | 39 | 83 |
| 3 | ಹು-ಧಾರವಾಡ ನಗರ | 336 | 172 | 164 | 137 | 33 | 104 |
| 4 | ಮಂಗಳೂರು ನಗರ | 305 | 175 | 130 | 61 | 19 | 42 |
| 5 | ಬೆಳಗಾವಿ ನಗರ | 262 | 58 | 204 | 65 | 5 | 60 |
| 6 | ಕಲಬುರಗಿ ನಗರ | 269 | 87 | 182 | 55 | 7 | 48 |
| 7 | ಬೆಂಗಳೂರು ಜಿಲ್ಲೆ | 980 | 248 | 732 | 278 | 33 | 245 |
| 8 | ತುಮಕೂರು | 575 | 176 | 399 | 168 | 29 | 139 |
| 9 | ಕೋಲಾರ | 176 | 31 | 145 | 67 | 9 | 58 |
| 10 | ಕೆ.ಜಿ.ಎಫ್ | 71 | 32 | 39 | 25 | 6 | 19 |
| 11 | ರಾಮನಗರ | 622 | 192 | 430 | 106 | 17 | 89 |
| 12 | ಚಿಕ್ಕಬಳ್ಳಾಪುರ | 226 | 118 | 108 | 65 | 20 | 45 |
| 13 | ಮೈಸೂರು ಜಿಲ್ಲೆ | 446 | 157 | 289 | 130 | 33 | 97 |
| 14 | ಹಾಸನ | 291 | 105 | 186 | 93 | 18 | 75 |
| 15 | ಚಾಮರಾಜನಗರ | 137 | 40 | 97 | 38 | 6 | 32 |
| 16 | ಕೊಡಗು | 166 | 94 | 72 | 42 | 21 | 21 |
| 17 | ಮಂಡ್ಯ | 599 | 54 | 545 | 137 | 3 | 134 |
| 18 | ದಾವಣಗೆರೆ | 465 | 93 | 372 | 113 | 3 | 110 |
| 19 | ಹಾವೇರಿ | 304 | 140 | 164 | 56 | 10 | 46 |
| 20 | ಶಿವಮೊಗ್ಗ | 512 | 218 | 294 | 131 | 50 | 81 |
| 21 | ಚಿತ್ರದುರ್ಗ | 287 | 64 | 223 | 56 | 6 | 50 |
| 22 | ದಕ್ಷಿಣ ಕನ್ನಡ | 163 | 79 | 84 | 36 | 10 | 26 |
| 23 | ಉತ್ತರ ಕನ್ನಡ | 181 | 69 | 112 | 38 | 7 | 31 |
| 24 | ಚಿಕ್ಕಮಗಳೂರು | 322 | 125 | 197 | 73 | 15 | 58 |
| 25 | ಉಡುಪಿ | 112 | 52 | 60 | 37 | 6 | 31 |
| 26 | ಬೆಳಗಾವಿ ಜಿಲ್ಲೆ | 406 | 116 | 290 | 116 | 9 | 107 |
| 27 | ಗದಗ | 118 | 79 | 39 | 19 | 5 | 14 |
| 28 | ವಿಜಯಾಪುರ | 315 | 126 | 189 | 90 | 10 | 80 |
| 29 | ಧಾರವಾಡ | 74 | 13 | 61 | 22 | 3 | 19 |
| 30 | ಬಾಗಲಕೋಟೆ | 162 | 64 | 98 | 44 | 5 | 39 |
| 31 | ಕಲ್ಬುರ್ಗಿ ಜಿಲ್ಲೆ | 166 | 74 | 92 | 53 | 8 | 45 |
| 32 | ಬೀದರ್ | 314 | 85 | 229 | 88 | 7 | 81 |
| 33 | ಯಾದಗಿರಿ | 99 | 48 | 51 | 28 | 11 | 17 |
| 34 | ಬಳ್ಳಾರಿ | 560 | 227 | 333 | 103 | 12 | 91 |
| 35 | ರಾಯಚೂರು | 274 | 153 | 121 | 109 | 64 | 45 |
| 36 | ಕೊಪ್ಪಳ | 169 | 84 | 85 | 53 | 2 | 51 |
| 37 | ರೈಲ್ವೇಸ್ | 493 | 73 | 420 | 96 | 1 | 95 |
| ಒಟ್ಟು | | **17607** | **6016** | **11591** | **4352** | **777** | **3575** |

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಸುನೀಲ್ ವಲ್ಯಾಪುರ್( ವಿಧಾನ ಸಭೆಯಿಂದ ಚುನಾಯಿತರಾದವರು)ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ. 2207ರ ಅನುಬಂಧ-2**

**ಕಳ್ಳತನ ಪ್ರಕರಣಗಳನ್ನು ತಡೆಗಟ್ಟಲು ಕೈಗೊಂಡ ಕ್ರಮಗಳು :**

- ಪೊಲೀಸ್ ಠಾಣಾ ಸರಹದ್ದಿನ ಬೀಟ್ ಮತ್ತು ಉಪ-ಬೀಟ್‌ಗಳ ಪ್ರಮುಖ ಸ್ಥಳಗಳಲ್ಲಿ ಸಾರ್ವಜನಿಕ ಸಂಪರ್ಕ ಸಭೆಗಳನ್ನು ನಡೆಸಿ, ಅಪರಾಧ ತಡೆಗಟ್ಟಲು ಮತ್ತು ಎಚ್ಚರ ವಹಿಸುವ ಬಗ್ಗೆ ಸೂಕ್ತ ತಿಳುವಳಿಕೆಗಳನ್ನು ನೀಡಲಾಗಿದೆ. ಸಾರ್ವಜನಿಕರ ಗಮನವನ್ನು ಬೇರೆಡೆಗೆ ಸೆಳೆದು ಕಳ್ಳತನ ಮಾಡುವುದು, ಬಸ್ಸುಗಳಲ್ಲಿ ಕಳ್ಳತನ/ಸೂಟ್‌ಕೇಸ್ ಕಳವು ಮಾಡುವವರ ಮೇಲೆ ಸೂಕ್ತ ಗಮನ ಹರಿಸುವಂತೆ ಸಾರ್ವಜನಿಕರಿಗೆ ಹಾಗೂ ಪ್ರಯಾಣಿಕರಿಗೆ ಸೂಚನೆಗಳನ್ನು ನೀಡಲಾಗಿದೆ.
- ಪೊಲೀಸ್ ಠಾಣೆಯ ಅಪರಾಧ ಸಿಬ್ಬಂದಿಗಳಿಗೆ ಕಾರಾಗೃಹದಿಂದ ಬಿಡುಗಡೆಯಾಗಿರುವ ಹಳೆಯ ಎಂ.ಓ ಆಸಾಮಿಗಳ ಬಗ್ಗೆ ಮಾಹಿತಿ ಸಂಗ್ರಹಿಸಿ ಅವರುಗಳ ಮೇಲೆ ಸೂಕ್ತ ನಿಗಾ ವಹಿಸಲು ಸೂಚಿಸಲಾಗಿದೆ.
- ಹೆಚ್ಚು ಅಪರಾಧ ನಡೆಯುವ ಸ್ಥಳಗಳಲ್ಲಿ ಅಪರಾಧಗಳನ್ನು ತಡೆಗಟ್ಟಲು ವಾಹನ ತಪಾಸಣೆ ಮಾಡಲು ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ ಸೂಕ್ತ ಸೂಚನೆಗಳನ್ನು ನೀಡಲಾಗಿದೆ.
- ಅಪರಾಧ ತಡೆಗಟ್ಟಲು ಮುಂಜಾಗ್ರತೆ ವಹಿಸುವಂತೆ ಸಾರ್ವಜನಿಕರಿಗೆ ಭಿತ್ತಿಪತ್ರ/ಕರಪತ್ರಗಳ ಮೂಲಕ ಮತ್ತು ಜನ ಸಂಪರ್ಕ ಸಭೆಗಳಲ್ಲಿ ತಿಳಿವಳಿಕೆ ನೀಡಲಾಗುತ್ತಿದೆ. ಹಾಗೂ ಬೀಗ ಹಾಕಿರುವ ಮನೆಗಳ ಬಗ್ಗೆ ಹೆಚ್ಚಿನ ನಿಗಾವಹಿಸಿ ಗಸ್ತು ಮಾಡುವಂತೆ ಅಧಿಕಾರಿಗಳಿಗೆ ಮತ್ತು ಸಿಬ್ಬಂದಿಯವರಿಗೆ ಸೂಕ್ತ ತಿಳುವಳಿಕೆ ನೀಡಲಾಗುತ್ತಿದೆ.
- ವಾಹನಗಳ ಕಳ್ಳತನ ತಡೆಗಟ್ಟಲು ವಾಹನದ ಮಾಲೀಕರಿಗೆ ವಾಹನಗಳಿಗೆ ಬೀಗ ಹಾಕಿ ಕಾಂಪೌಂಡ್/ಶೆಡ್ ಒಳಗಡೆ ನಿಲ್ಲಿಸಿಕೊಳ್ಳುವಂತೆ ಸಭೆಗಳಲ್ಲಿ ಸೂಚಿಸಿರುತ್ತದೆ. ಹಾಗೂ ವಿಶೇಷ ರಾತ್ರಿ ಗಸ್ತು ಕ್ರಮ ಕೈಗೊಳ್ಳುವಂತೆ ಸೂಚಿಸಿರುತ್ತೆ.
- ಪೊಲೀಸ್ ಠಾಣಾ ಸರಹದ್ದುಗಳಲ್ಲಿ ವಾಸ ಮಾಡುವ ಎಂ.ಓ ಆಸಾಮಿಗಳನ್ನು, ಠಾಣೆಗೆ ಕರೆತಂದು ಕೂಲಂಕಶವಾಗಿ ವಿಚಾರಣೆ ಮಾಡಿ ಅನುಮಾನಾಸ್ಪದ ವ್ಯಕ್ತಿಗಳ ವಿರುದ್ಧ ಭದ್ರತಾ ಕಾಯ್ದೆಯಡಿ ಪ್ರಕರಣಗಳನ್ನು ದಾಖಲಿಸುವಂತೆ ಸೂಚಿಸಲಾಗಿದೆ.
- ವಯೋವೃದ್ಧರು, ಒಂಟಿ ಮಹಿಳೆಯರು ವಾಸ ಮಾಡುವ ಮನೆಗಳನ್ನು ಗುರುತಿಸಿ, ಅವರುಗಳ ಮನೆಗಳ ಬಳಿ ಪಾಯಿಂಟ್ ಪುಸ್ತಕಗಳನ್ನು ನಿಯೋಜಿಸಿ, ಅವರ ಕುಂದು ಕೊರತೆಗಳ ಬಗ್ಗೆ ವಿಚಾರಣೆ ಮಾಡಿ ಗಸ್ತು ವ್ಯವಸ್ಥೆಯನ್ನು ಚುರುಕುಗೊಳಿಸುವಂತೆ ಚೀತಾ, ಹೊಯ್ಸಳ, ಬೀಟ್ ಸಿಬ್ಬಂದಿಗಳಿಗೆ ಸೂಕ್ತ ತಿಳುವಳಿಕೆ ನೀಡಲಾಗಿರುತ್ತದೆ.
- ಅಪರಾಧ ಸಿಬ್ಬಂದಿಗಳಿಗೆ ಅಂತರರಾಜ್ಯ ಅಪರಾಧ ತಂಡಗಳು ಹಾಗೂ ಸಮಾಜಘಾತುಕ ವ್ಯಕ್ತಿಗಳ ಅಡಗು ತಾಣಗಳ ಬಗ್ಗೆ ಮಾಹಿತಿ ಸಂಗ್ರಹಿಸುವಂತೆ ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ ಸೂಕ್ತ ತಿಳುವಳಿಕೆ ನೀಡಲಾಗಿರುತ್ತದೆ.
- ಗಸ್ತು ವಾಹನದಲ್ಲಿನ ಮೆಗಾ ಫೋನ್‌ಗಳ ಮೂಲಕ ಅಪರಾಧಗಳನ್ನು ತಡೆಗಟ್ಟುವ ಬಗ್ಗೆ ಸಾರ್ವಜನಿಕರು ಅನುಸರಿಸಬೇಕಾದ ವಿಷಯದಲ್ಲಿ ಮಾಹಿತಿಯನ್ನು ನೀಡಿ ಸಾರ್ವಜನಿಕರಲ್ಲಿ ಅರಿವು ಮೂಡಿಸಲಾಗುತ್ತಿದೆ.
- ಪ್ರಮುಖ ಪಾರ್ಕ್‌ಗಳಿಗೆ ವಾಯು ವಿಹಾರಕ್ಕೆ ಬರುವ ಸಾರ್ವಜನಿಕರಿಗೆ ತಮ್ಮ ಮೈಮೇಲಿರುವ ಬಂಗಾರದ ಆಭರಣಗಳು, ಮೊಬೈಲ್ ಫೋನ್‌ಗಳು ಹಾಗೂ ಇತರೆ ಬೆಲೆ ಬಾಳುವ ವಸ್ತುಗಳನ್ನು ಸಾರ್ವಜನಿಕವಾಗಿ ಪ್ರದರ್ಶಿಸದಂತೆ ಹಾಗೂ ಒಂಟಿಯಾಗಿ ಓಡಾಡದಂತೆ, ಅಪರಿಚಿತ ಜನರುಗಳ ಮಾತಿಗೆ ಮರುಳಾಗದೆ, ಅನುಮಾನಾಸ್ಪದ ಆಸಾಮಿಗಳ ಬಗ್ಗೆ ಪೊಲೀಸರಿಗೆ ಮಾಹಿತಿ ನೀಡುವಂತೆ ಸೂಚಿಸಲಾಗಿದೆ.
- ಸರಹದ್ದಿನಲ್ಲಿ ವಾಸವಾಗಿರುವ ಸಾರ್ವಜನಿಕರಿಗೆ ಹಾಗೂ ಅಂಗಡಿ ಮಾಲೀಕರುಗಳಿಗೆ ಕೆಲಸಕ್ಕೆ ನೌಕರರನ್ನು ನೇಮಕ ಮಾಡಿಕೊಳ್ಳುವ ಮೊದಲು ಅವರುಗಳ ಪೂರ್ವಾಪರಗಳನ್ನು ತಿಳಿದುಕೊಂಡು ಹಾಗೂ ಸಂಬಂಧಪಟ್ಟ ಠಾಣೆಗಳಿಗೆ ಮಾಹಿತಿ ವಿನಿಮಯ ಮಾಡಿಕೊಳ್ಳಲು ಹಾಗೂ ಅಪರಾಧಗಳನ್ನು ತಡೆಗಟ್ಟಿ/ಪತ್ತೆಮಾಡುವುದು. ಹಾಗೂ ಈಗಾಗಲೇ ವರದಿಯಾಗುವ ಪ್ರಕರಣಗಳಲ್ಲಿ ಆರೋಪಿಗಳ ಪತ್ತೆಯ ಬಗ್ಗೆ ಎಲ್ಲಾ ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ ಸೂಕ್ತ ತಿಳುವಳಿಕೆ ನೀಡಲಾಗಿದೆ.

..2

**ಕಳ್ಳತನ ಪ್ರಕರಣಗಳು ಪತ್ತೆ ಹಚ್ಚಲು ಕೈಕೊಂಡ ಕ್ರಮಗಳು.**

- ಕಳ್ಳತನ ಪ್ರಕರಣಗಳನ್ನು ಪತ್ತೆ ಹಚ್ಚಲು ವಿಶೇಷ ತಂಡಗಳನ್ನು ರಚಿಸಿ ಚುರುಕಾದ ಸಿಬ್ಬಂದಿಯನ್ನು ನೇಮಿಸಿ ಅರೋಪಿ ಮತ್ತು ಕಳ್ಳತನವಾದ ವಸ್ತುಗಳನ್ನು ಪತ್ತೆ ಮಾಡಲಾಗುತ್ತಿದೆ.
- ತಾಂತ್ರಿಕ ಸಹಾಯದಿಂದ ಸಹ ಹೆಚ್ಚಿನ ಸಂಖ್ಯೆಯಲ್ಲಿ ಪ್ರಕರಣಗಳು ಪತ್ತೆ ಮಾಡಲಾಗುತ್ತಿದೆ.
- ಬೆರಳು ಮುದ್ರೆ ಸಹಾಯದಿಂದ ಮತ್ತು ಶ್ವಾನದಳದ ಸಹಾಯದಿಂದ ಪತ್ತೆ ಮಾಡಲಾಗುತ್ತಿದೆ.
- ಮೊಬೈಲ್ ಟವರ್ ಡಂಪ್ ತೆಗೆದು, ಸೆಲ್ ಐಡಿ ಮತ್ತು ಮೊಬೈಲ್ ನಂಬರ್‌ಗಳ ಸಿ.ಡಿ.ಆರ್ ಅನಾಲಿಸಿಸ್ ನಡೆಸಿ ಆರೋಪಿಗಳನ್ನು ಶೀಘ್ರವಾಗಿ ಪತ್ತೆ ಮಾಡುವಲ್ಲಿ ಕ್ರಮ ಕೈಗೊಳ್ಳಲಾಗಿರುತ್ತದೆ.
- ಕೃತ್ಯ ನಡೆದ ಸ್ಥಳದಿಂದ ಆರೋಪಿಗಳು ಪ್ರಯಾಣಿಸಬಹುದಾದ/ಓಡಾಡಿರಬಹುದಾದ ಸ್ಥಳಗಳಲ್ಲಿ ಸಿಗುವಂತಹ ಸಿಸಿ ಕ್ಯಾಮೆರಾಗಳ ಫೂಟೇಜ್‌ಗಳನ್ನು ಆದಷ್ಟು ಬೇಗನೇ ಪಡೆದು ಪರಿಶೀಲಿಸಿ ಆರೋಪಿತರ ಚಹರೆ ವಿವರಗಳನ್ನು ಪಿರ್ಯಾದುದಾರರು ನೀಡುವ ಆರೋಪಿಗಳ ಚಹರೆ ವಿವರಗಳೊಂದಿಗೆ ಹೋಲಿಕೆ ಮಾಡಿ ಪ್ರಕರಣವನ್ನು ಪತ್ತೆ ಹಚ್ಚುವಲ್ಲಿ ಕ್ರಮ ಕೈಗೊಳ್ಳಲಾಗಿರುತ್ತದೆ.